## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 822

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ, (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 20.12.2021

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಚಿನ್ನದಿಂದ-ಅದಿರುವರೆಗೆ ತೂಕ ಮಾಡಲಿಕ್ಕೆ ಪ್ರಸ್ತುತ ಬಳಸಲಾಗುತ್ತಿರುವ ವಿವಿಧ ತೂಕದ ಯಂತ್ರಗಳಾವುವು; (ವಿವರ ಒದಗಿಸುವುದು) | ರಾಜ್ಯದಲ್ಲಿ, ಎಲ್ಲಾ ವಸ್ತುಗಳನ್ನು ತೂಕ ಮಾಡಲು Non Automatic weighing Scale Class I, Class II, Class III and Class IV ಯಂತ್ರಗಳನ್ನು ಉಪಯೋಗಿಸಲಾಗುತ್ತಿದೆ. ಇದರ ಜೊತೆಗೆ ಈ ಕೆಳಕಂಡ ಮೆಕ್ಯಾನಿಕ್ ತೂಕದ ಯಂತ್ರಗಳನ್ನು ದಿನನಿತ್ಯದ ವ್ಯವಹಾರಗಳಲ್ಲಿ ಬಳಸಲಾಗುತ್ತಿದೆ.<br>1. ಕೌಂಟರ್ ಸ್ಕೇಲ್<br>2. ಭಿಮ್ ಸ್ಕೇಲ್<br>3. ಫ್ಲಾಟ್ ಫಾರಂ ಸ್ಕೇಲ್<br>4. ಸ್ಪ್ರಿಂಗ್ ಬ್ಯಾಲೆನ್ಸ್<br>ಚಿನ್ನದ ಆಭರಣಗಳನ್ನು ತೂಕ ಮಾಡಲು 1 ಮಿಲಿ ಗ್ರಾಂ ನಿಖರತೆಯುಳ್ಳ Non Automatic weighing Scale Class I & Class II ಗಳನ್ನು ಬಳಸಲಾಗುತ್ತಿದೆ. |
| (ಆ) | ಈ ತೂಕದ ಯಂತ್ರಗಳು ನಿಖರವಾದ ತೂಕವನ್ನು ಗ್ರಾಹಕರಿಗೆ ತೋರಿಸುತ್ತಿರುವ ಬಗ್ಗೆ ಸರ್ಕಾರ ಹೇಗೆ ದೃಢೀಕರಿಸಿಕೊಳ್ಳುತ್ತಿದೆ; | ವ್ಯಾಪಾರದ ಸ್ಥಳಗಳಲ್ಲಿ ಬಳಸುವ ಎಲ್ಲಾ ತೂಕ ಯಂತ್ರಗಳ ನಿಖರತೆಯನ್ನು ಪರಿಶೀಲಿಸಿ ಸತ್ಯಾಪನಾ ಪ್ರಮಾಣ ಪತ್ರವನ್ನು ನೀಡಲಾಗುತ್ತದೆ. ಪ್ರತಿ ವರ್ಷ ತೂಕ ಯಂತ್ರಗಳ ಪರಿಶೀಲನೆ ಮಾಡಿ ಸತ್ಯಾಪನಾ ಪ್ರಮಾಣ ಪತ್ರವನ್ನು ನವೀಕರಿಸಲಾಗುವುದು. |
| (ಇ) | ಈ ರೀತಿ ದೃಢೀಕರಣ ವ್ಯವಸ್ಥೆಯ ಬಳಿಕವು ಗ್ರಾಹಕರು ನಿಖರ ತೂಕದ ಸಾಮಾಗ್ರಿಗಳನ್ನು ಪಡೆಯುವಲ್ಲಿ ಮೋಸಕ್ಕೆ ಒಳಗಾಗುತ್ತಿರುವುದನ್ನು ತಪ್ಪಿಸಲು ಸರ್ಕಾರದ ಮುಂದಿರುವ ಯೋಜನೆ -ಯೋಚನೆಗಳೇನು; | ಆಗಿಂದ್ದಾಗ್ಗೆ ತೂಕ ಯಂತ್ರಗಳನ್ನು ಬಳಸುವ ಸ್ಥಳಗಳನ್ನು ತನಿಖೆ ತಪಾಸಣೆಯನ್ನು ಕೈಗೊಂಡು ತಪ್ಪಿತಸ್ಥರ ಮೇಲೆ ಪ್ರಕರಣ ದಾಖಲಿಸಿ ನಿಯಮಾನುಸಾರ ದಂಡ ವಿಧಿಸಲಾಗುವುದು ಹಾಗೂ ನ್ಯಾಯಾಲಯಗಳಲ್ಲಿ ಪ್ರಕರಣಗಳನ್ನು ಹೂಡಲಾಗುತ್ತಿದೆ. |

| | | |
|---|---|---|
| (ಈ) | ಇಲ್ಲಿಯವರೆಗೆ ಅಳತೆ ಮತ್ತು ತೂಕಗಳಲ್ಲಿ ನಡೆದಿರುವ ಅಕ್ರಮಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; (ಅಂಕಿ ಅಂಶಗಳ ವಿವರ ಒದಗಿಸುವುದು) | ಬಂದಿದೆ.<br>ಕಳೆದ ಐದು ವರ್ಷಗಳಲ್ಲಿ ಅಳತೆ ಮತ್ತು ತೂಕದಲ್ಲಿ ಉಂಟಾಗಿರುವ ಅಕ್ರಮಗಳು, ದಾಖಲಿಸಿದ ಪ್ರಕರಣಗಳು ಮತ್ತು ವಸೂಲಿ ಮಾಡಲಾದ ಶುಲ್ಕದ ಮಾಹಿತಿ ಈ ಕೆಳಕಂಡಂತಿದೆ. |

| ವರ್ಷ | ತಪಾಸಣೆ | ಹೂಡಲಾದ ಮೊಕದ್ದಮೆ | ಅಭಿಸಂಧಾನ ಶುಲ್ಕ |
|---|---|---|---|
| 2018-19 | 47869 | 18742 | 38564900 |
| 2019-20 | 56858 | 21906 | 54838000 |
| 2020-21 | 71023 | 22848 | 50815240 |
| 2021-22 (ನವೆಂಬರ್ ಅಂತ್ಯಕ್ಕೆ) | 47739 | 13628 | 35887400 |

| | | |
|---|---|---|
| (ಉ) | ಅಳತೆ ಮತ್ತು ತೂಕದಲ್ಲಿ ಗ್ರಾಹಕರಿಗೆ ವಂಚನೆಯಾಗದಂತೆ ನೂತನ ತಂತ್ರಜ್ಞಾನದ ಕುರಿತು ಸರ್ಕಾರದ ಚಿಂತನೆಗಳೇನು? | ತೂಕ ಮತ್ತು ಅಳತೆ ಸಾಧನಗಳನ್ನು ಉಪಯೋಗಿಸುವ ಮೊದಲು ಕೇಂದ್ರ ಸರ್ಕಾರದಿಂದ ನೀಡಲಾಗುತ್ತಿರುವ ತೂಕ ಮತ್ತು ಅಳತೆ ಸಾಧನಗಳಿಗೆ ಮಾಡೆಲ್ ಅಪ್ರೂವಲ್ ಸರ್ಟಿಫೀಕೆಟ್ ನೀಡಲಾಗುತ್ತಿದೆ. |

ಸಂಖ್ಯೆ: ಆನಾಸ 119 ಕಾಮಾಸೇ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು